(ಪ...

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | **1152** |
| ಸದಸ್ಯರ ಹೆಸರು | : | ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | **20.12.2018** |
| ಉತ್ತರಿಸುವ ಸಚಿವರು | : | ಮುಖ್ಯಮಂತ್ರಿಯವರು |

*********

| | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತ (ಕೆ.ಆರ್.ಇ.ಡಿ.ಎಲ್) ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ 48 ಗುತ್ತಿಗೆ ನೌಕರರ ಪೈಕಿ ಎಷ್ಟು ಜನರನ್ನು ಖಾಯಂ ಪ್ರಕ್ರಿಯೆಯಿಂದ ಕೈಬಿಡಲಾಯಿತು; ಕೈಬಿಡಲು ಕಾರಣಗಳೇನು; (ವಿವರವಾಗಿ ಹೆಸರು ಹುದ್ದೆಯ ಪದನಾಮ, ವಿದ್ಯಾರ್ಹತೆ ಹಾಗೂ ಇವರು ಮಾಸಿಕ ಪಡೆಯುತ್ತಿದ್ದ ವೇತನ ಎಷ್ಟು; ಮಾಹಿತಿ ನೀಡುವುದು) | ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತ (ಕೆ.ಆರ್.ಇ.ಡಿ.ಎಲ್) ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಕೆಲಸ ನಿರ್ವಹಿಸುತ್ತಿದ್ದ 33 ಜನರನ್ನು (ದಿ.28.07.2006 ರಂದು 31 ನೌಕರರು ಹಾಗೂ ದಿ. 04.08.2006 ರಂದು 2 ನೌಕರರು) ಸಂಸ್ಥೆಯ ವೃಂದ ಮತ್ತು ನೇಮಕಾತಿ ನಿಯಮಗಳ ಕ್ಲಾಸ್ 3.8 ರಡಿಯಲ್ಲಿ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.<br><br>ಆದರೆ, ಉಳಿದ 15 ನೌಕರರ ಪೈಕಿ 3 ಗುತ್ತಿಗೆ ನೌಕರರು ಸಂಸ್ಥೆಯ ವೃಂದ ಮತ್ತು ನೇಮಕಾತಿ ನಿಯಮಗಳು ಕ್ಲಾಸ್ 3.8 ರಡಿಯಲ್ಲಿ ನಿಗದಿಪಡಿಸಿದ್ದ ಕನಿಷ್ಠ ಸೇವಾ ಅವಧಿಯನ್ನು ಪೂರೈಸಿರುವುದಿಲ್ಲ ಮತ್ತು ಉಳಿದ 12 ನೌಕರರು ಮೆ॥ ಬಿ.ಎಸ್. ಕನ್ಸಲ್ಟನ್ಸಿ ಸರ್ವಿಸಸ್ ಸಂಸ್ಥೆಯವರಿಂದ ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದು, ಇವರನ್ನು ಖಾಯಂಗೊಳಿಸಲು ಅವಕಾಶ ಇರುವುದಿಲ್ಲ.<br><br>ಸದರಿ ನೌಕರರ ಹೆಸರು, ಹುದ್ದೆಯ ಪದನಾಮ, ವಿದ್ಯಾರ್ಹತೆ ಹಾಗೂ ಇವರು ಮಾಸಿಕ ಪಡೆಯುತ್ತಿದ್ದ ವೇತನ ವಿವರ ಅನುಬಂಧದಲ್ಲಿ ನೀಡಲಾಗಿದೆ. |
| ಆ) | ಖಾಯಂ ಪ್ರಕ್ರಿಯೆಯಿಂದ ಕೈಬಿಟ್ಟ ನೌಕರರನ್ನು ಈ ಮೊದಲು ಖಾಯಂ ಮಾಡಿದ ನೌಕರರಂತೆ ಸರಿಸಮಾನಾಗಿ (On Par With) ಖಾಯಂ ಮಾಡುವಂತೆ ಮಾನ್ಯ ಉಚ್ಛ ನ್ಯಾಯಾಲಯವು ಆದೇಶ ಮಾಡಿರುವುದು ನಿಜವೇ; | ಮಾನ್ಯ ಉಚ್ಛನ್ಯಾಯಾಲಯವು ನೀಡಿರುವ ರಿಟ್ ಅರ್ಜಿ ಸಂಖ್ಯೆ : 15469-15483/2008 (ಎಸ್-ಪಿ.ಆರ್.ಒ) ರ ತೀರ್ಪು ದಿ: 16.07.2014 ರಲ್ಲಿ ನೀಡಿರುವ ತೀರ್ಪಿನ ಉದೃತ ಭಾಗ ಕೆಳಕಂಡಂತಿರುತ್ತದೆ.<br>The respondent no.2 is directed to consider the cases of the petitioners and pass appropriate orders for regularization of services of the petitioners on par with the respondents 4 to 48, on the representations to respondent No.2 along with relevant documents to be made by the petitioners within two weeks from today. The time for compliance by Respondent No.2 is four weeks from the date of receipt of such representation. With these observations, the writ petitions stand disposed of''. |

...2)

(ಪ...

| | | |
|---|---|---|
| ಇ) | ಕಾನೂನು ಇಲಾಖೆಯು ಅವರಿಗೆ ಸರಿಸಮಾನವಾಗಿ ವಿಲೀನಗೊಳಿಸುವಂತೆ ಅಭಿಪ್ರಾಯ ನೀಡಿದ್ದು, ಈ ಅಭಿಪ್ರಾಯಕ್ಕೆ ಮಾನ್ಯ ಇಂಧನ ಸಚಿವರು ಅನುಮೋದನೆ ನೀಡಿದರೂ ಕೂಡ ಅಧಿಕಾರಿಗಳು ಇವರನ್ನು ಖಾಯಂ ಮಾಡದಿರಲು ಕಾರಣಗಳೇನು; | ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪು ದಿನಾಂಕ: 16.07.2014 ರನುಸಾರ ರಿಟ್ ಅರ್ಜಿದಾರರು ಕ್ರೆಡಲ್ ಸಂಸ್ಥೆಗೆ ತಮ್ಮನ್ನು ಸೇವಾ ಸಕ್ರಮಗೊಳಿಸುವ ಬಗ್ಗೆ ಮನವಿಯನ್ನು ಸಲ್ಲಿಸಿರುತ್ತಾರೆ. ಈ ಮನವಿಯನ್ನು ನಿಯಮಾನುಸಾರ ಪರಿಶೀಲಿಸಿ ಕ್ರೆಡಲ್ ಸಂಸ್ಥೆಯು ದಿನಾಂಕ: 19.08.2014 ಮತ್ತು 04.12.2014 ರಂದು ಹಿಂಬರಹ ನೀಡಲಾಗಿರುತ್ತದೆ.<br><br>ಸೇವಾ ಸಕ್ರಮಾತಿಗೊಳಿಸುವಂತೆ ಕೋರಿ ರಿಟ್ ಅರ್ಜಿ ಸಲ್ಲಿಸಿದ 15 ನೌಕರರ ಪೈಕಿ 03 ನೌಕರರು ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿದ್ದು, ಸಕ್ರಮಗೊಳಿಸಲು ಅಂದು ಚಾಲ್ತಿಯಲ್ಲಿದ್ದ ವೃಂದ ಮತ್ತು ನೇಮಕಾತಿ ನಿಯಮಗಳನುಸಾರ ಒಂದು ವರ್ಷದ ಕನಿಷ್ಠ ಸೇವಾ ಅರ್ಹತೆಯನ್ನು ಪಡೆಯದೆ ಇದ್ದುದರಿಂದ, ಸದರಿ 03 ನೌಕರರನ್ನು 33 ಮಂದಿ ನೌಕರರೊಂದಿಗೆ ಸಕ್ರಮಗೊಳಿಸಿರುವುದಿಲ್ಲ. |
| ಈ) | ಮಾನ್ಯ ಉಚ್ಛ ನ್ಯಾಯಾಲಯದ ಆದೇಶವು ಸಂವಿಧಾನದ ವಿಧಿ ಅನ್ವಯ ಇಲಾಖೆಗೆ ಬೈಡಿಂಗ್ ಅಲ್ಲವೇ, ಹಾಗಾದಲ್ಲಿ ಈ ಆದೇಶವನ್ನು ಏಕೆ ಜಾರಿಗೊಳಿಸಲಿಲ್ಲ ಹಾಗೂ ಮೇಲ್ಮನವಿಯನ್ನು ಹಾಕಿರುವುದಿಲ್ಲ; ಕಳೆದ 12 ವರ್ಷಗಳಿಂದ ಹೋರಾಟ ನಡೆಸುತ್ತಿರುವ ನೊಂದ ಅಭ್ಯರ್ಥಿಗಳನ್ನು ಸರ್ಕಾರವು ಯಾವ ಕಾಲಮಿತಿಯೊಳಗೆ ಮಾನ್ಯ ಉಚ್ಛ ನ್ಯಾಯಾಲಯದ ಆದೇಶದಂತೆ KREDL ಸಂಸ್ಥೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಿ ಆದೇಶ ಹೊರಡಿಸಿ ನ್ಯಾಯ ಒದಗಿಸಲಾಗುವುದು? | 12 ಮಂದಿ ನೌಕರರು ಹೊರಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವುದರಿಂದ, ಸೇವಾ ಸಕ್ರಮಾತಿಗೆ ಅರ್ಹರಿರುವುದಿಲ್ಲ. ಈ 15 ಮಂದಿ ನೌಕರರನ್ನು 2009 ನೇ ಸಾಲಿನಲ್ಲಿಯೇ ತಾತ್ಕಾಲಿಕ ಸೇವೆಯಿಂದ ಬಿಡುಗಡೆಗೊಳಿಸಲಾಗಿದ್ದು, ಇವರು ಸೇವೆಯಲ್ಲಿ ಮುಂದುವರೆದಿರುವುದಿಲ್ಲ.<br><br>ಸರ್ವೋಚ್ಚ ನ್ಯಾಯಾಲಯವು (2006) 4 SCC 1 ಉಮಾದೇವಿ v/s ಕರ್ನಾಟಕ ರಾಜ್ಯ ಪ್ರಕರಣದಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸುವ ಜನರನ್ನು ಸಕ್ರಮಗೊಳಿಸುವ ಬಗ್ಗೆ ನೀಡಿರುವ ತೀರ್ಪನ್ನು ಹಲವು ಬಾರಿ ಸರ್ವೋಚ್ಚ ನ್ಯಾಯಾಲಯವು ಎತ್ತಿ ಹಿಡಿದಿರುವುದರಿಂದ ಅರ್ಜಿದಾರರುಗಳ ಮನವಿಗಳನ್ನು ನಿಯಮಾನುಸಾರ ಪರಿಗಣಿಸಲು ಸಾಧ್ಯವಿಲ್ಲವೆಂದು ತಿಳಿಸಿ ಸದರಿಯವರ ಮನವಿಗಳನ್ನು ತಿರಸ್ಕರಿಸಿ ಹಿಂಬರಹಗಳನ್ನು ನೀಡಲಾಗಿದೆ.<br><br>ಕ್ರೆಡಲ್ ಸಂಸ್ಥೆಯು ನೀಡಿದ ಹಿಂಬರಹದ ಬಗ್ಗೆ ರಿಟ್ ಅರ್ಜಿದಾರರು ಸರ್ಕಾರಕ್ಕೆ ಮನವಿ ಸಲ್ಲಿಸಿದ್ದು, ಈ ಬಗ್ಗೆ ಕಾನೂನು ಇಲಾಖೆಯ ಅಭಿಪ್ರಾಯವನ್ನು ಕೋರಲಾಗಿ, ರಿಟ್ ಅರ್ಜಿ ಸಂಖ್ಯೆ: 15469-15483/2008 (ಎಸ್-ಪಿ.ಆರ್.ಒ) 16.07.2014 ರ ತೀರ್ಪನ್ನು ಕೂಲಂಕಷವಾಗಿ ಪರಿಶೀಲಿಸಿ ಕಾನೂನು ಇಲಾಖೆಯು ಈ ಕೆಳಕಂಡಂತೆ ಅಭಿಪ್ರಾಯವನ್ನು ಸಹ ನೀಡಿರುತ್ತದೆ:-<br><br>" As against the endorsement issued by the R-2 i.e KREDL the petitioners have not approached the court of law. The petitioners can challenge the endorsement before the HHCK by filing necessary W.P." |

| | | |
|---|---|---|
| | | ಇಂಧನ ಇಲಾಖೆಯು ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪು ಹಾಗೂ ಕಾನೂನು ಇಲಾಖೆಯು ನೀಡಿದ ಅಭಿಪ್ರಾಯದನುಸಾರ ಪ್ರಕರಣದ ವಾಸ್ತವಾಂಶಗಳನ್ನು ಮಾನ್ಯ ಇಂಧನ ಸಚಿವರ ಅವಗಾಹನೆಗೆ ತಂದು ಅನುಮೋದನೆ ಪಡೆದು ನಿಯಮಾನುಸಾರ ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ ಇವರಿಗೆ ತಿಳಿಸಲಾಗಿರುತ್ತದೆ. |

ಸಂಖ್ಯೆ: ಇಎನ್ 241 ಇಬಿಎಸ್ 2018

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

## ಅನುಬಂಧ-1

**3 ಗುತ್ತಿಗೆ ನೌಕರರ ಹೆಸರು, ಹುದ್ದೆಯ ಪದನಾಮ, ವಿದ್ಯಾರ್ಹತೆ, ಗುತ್ತಿಗೆ ಆಧಾರದ ಮೇಲೆ ಕಾರ್ಯಾರಂಭ ಗೊಳಿಸಿದ ದಿನಾಂಕ ಹಾಗೂ ಮಾಸಿಕ ವೇತನ ವಿವರ:**

| ಕ್ರ ಸಂ. | ಹೆಸರು ಮತ್ತು ಪದನಾಮ | ವಿದ್ಯಾರ್ಹತೆ | ಗುತ್ತಿಗೆ ಆಧಾರದ ಮೇಲೆ ಕಾರ್ಯಾರಂಭ ಗೊಳಿಸಿದ ದಿನಾಂಕ | ಸಂಸ್ಥೆಯ ಸೇವೆಯಿಂದ ಬಿಡುಗಡೆಗೊಂಡ ದಿನಾಂಕ | ಒಟ್ಟು ಅಂದಿನ ವೇತನ (ರೂ.ಗಳಲ್ಲಿ) | ನಿವ್ವಳ ಅಂದಿನ ವೇತನ (ರೂ.ಗಳಲ್ಲಿ) |
|---|---|---|---|---|---|---|
| 1 | ಸುಧೀರ್‌ಕುಮಾರ್ ಬಿ ಎನ್. ಸಹಾಯಕರು ಆದಿತ್ಯ ಸೋಲಾರ್ ಶಾಪ್ | B.Com | 12.09.2005 | 31.01.2009 | 5075 | 4484 |
| 2 | ಬಸವರಾಜು ಬಿ. ಕೆ. ಸೋಗಿ ವಿಂಡ್ ಡೆಮೋ ಪ್ರಾಜೆಕ್ಟ್ | ITI | 31.01.2006 | 31.01.2009 | 4425 | 3945 |
| 3 | ಕಲ್ಪನಾ ವಿ. ಕೆ. ಸಹಾಯಕರು ಪ್ರಚಾರ ಕಾರ್ಯ | PUC | 07.06.2006 | 31.01.2009 | 4425 | 3945 |

**12 ಹೊರಗುತ್ತಿಗೆ ನೌಕರರ ಹೆಸರು, ಹುದ್ದೆಯ ಪದನಾಮ, ವಿದ್ಯಾರ್ಹತೆ, ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯಾರಂಭ ಗೊಳಿಸಿದ ದಿನಾಂಕ ಹಾಗೂ ಮಾಸಿಕ ವೇತನ ವಿವರ:**

| ಕ್ರ ಸಂ. | ಹೆಸರು ಮತ್ತು ಪದನಾಮ | ವಿದ್ಯಾರ್ಹತೆ | ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯಾರಂಭ ಗೊಳಿಸಿದ ದಿನಾಂಕ | ಸಂಸ್ಥೆಯಲ್ಲಿನ ಸೇವೆ ಕೊನೆಗೊಂಡ ದಿನಾಂಕ | ಒಟ್ಟು ಅಂದಿನ ವೇತನ (ರೂ.ಗಳಲ್ಲಿ) | ನಿವ್ವಳ ಅಂದಿನ ವೇತನ (ರೂ.ಗಳಲ್ಲಿ) |
|---|---|---|---|---|---|---|
| 1 | ಸುರೇಖಾ ಟಿ ಎನ್ ಸಹಾಯಕ ತಾಂತ್ರಿಕ ಅಧಿಕಾರಿ | B.E | 08.09.2004 | 31.01.2009 | 9485 | 8325 |
| 2 | ವಿಜಯಲಕ್ಷ್ಮಿ ಎನ್ ಪಿ ಸಹಾಯಕ ತಾಂತ್ರಿಕ ಅಧಿಕಾರಿ | B.E | 24.04.2006 | 31.01.2009 | 9485 | 8325 |
| 3 | ಶ್ರೀನಿವಾಸ್‌ಮೂರ್ತಿ ಕೆ. ವಿ. ಕಿರಿಯ ಅಭಿಯಂತರರು | Diploma Engineering | 01.05.2007 | 31.01.2009 | 5875 | 5110 |
| 4 | ಗೋಪಾಲ್ ಪಿ. ಆರ್. ಯೋಜನಾಕಾರ್ಯ -ರಾಜ್ಯ ಮಟ್ಟದ ಇಂಧನವನ. | M.A | 23.07.2007 | 31.01.2009 | 4425 | 3894 |
| 5 | ರಘುಪ್ರಸಾದ್ ಕೆ ವಿ ಯೋಜನಾಕಾರ್ಯ- ಸೋಲಾರ್ ವಿಭಾಗ | ITI | 07.02.2007 | 31.01.2009 | 4425 | 3945 |
| 6 | ಶ್ರೀನಿವಾಸ್. ಸಿ ದ್ವಿತಿಯ ದರ್ಜೆ ಸಹಾಯಕರು | ITI | 01.07.2005 | 31.01.2009 | 4000 | 3520 |
| 7 | ಶಿವಕುಮಾರ್ ಎಮ್. ಸಿಸ್ಟಮ್ ಅನಾಲಿಸ್ಟ್ | M.Sc | 17.10.2005 | 31.01.2009 | 7825 | 6826 |
| 8 | ರೇವಣ್ಣ ಎಮ್ ಟಿ. ದ್ವಿತಿಯ ದರ್ಜೆ ಸಹಾಯಕರು | PUC | 12.08.2005 | 31.01.2009 | 4000 | 3520 |
| 9 | ಶಿವಪ್ರಸಾದ ಎನ್. ಪಿವ್ಯೂನ್ | SSLC | 01.02.2005 | 31.01.2009 | 3425 | 3014 |
| 10 | ನಾಗರಾಜು ಟಿ ಜೆ. ಪಿವ್ಯೂನ್ | SSLC | 02.01.2006 | 31.01.2009 | 3425 | 3014 |
| 11 | ಸಿದ್ದಲಿಂಗಯ್ಯ ಸಿ. ಜಿ. ಪಿವ್ಯೂನ್ | SSLC | 10.03.2008 | 31.01.2009 | 3925 | 3505 |
| 12 | ಮೋಹನ್ ರಾವ್ ಪಿ ಪಿವ್ಯೂನ್ | SSLC | 10.03.2008 | 31.01.2009 | 3925 | 3505 |